# ನೀತಿಯಿಂದ ಅಭ್ಯಾಸದವರೆಗೆ: ಉತ್ತರಾಖಂಡದ ಒಂದು ಕತೆ

ಅನಂತ್ ಗಂಗೊಳ ಮತ್ತು ಕೈಲಾಶ್ ಚಂದ್ರ ಖಂಡಪಾಲ್





ನಮ್ಮ ಸಾರ್ವಜನಿಕ ಶಿಕ್ಷಣ ವ್ಯವಸ್ಥೆ ಕ್ಷೀಣಿಸುತ್ತಿರುವ ಸ್ಥಿತಿಯ ಸುತ್ತ ಕೇಳಿಬರುತ್ತಿರುವ ಮಾತುಗಳಿಗೆ ಕೊನೆ ಇಲ್ಲದಂತಾಗಿವೆ. ವಿಶ್ಲೇಷಣೆ ಗೊತ್ತಿಲ್ಲದವರೂ ಅದನ್ನು ಆಡಿಕೊಳ್ಳುತ್ತಿದ್ದಾರೆ. ಶಿಕ್ಷಣದ ಸ್ಥಿತಿಗತಿ ಪ್ರತಿಯೊಬ್ಬರನ್ನೂ ಬಾಧಿಸುವುದರಿಂದ, ಎಲ್ಲರಿಗೂ ಅದರ ಬಗ್ಗೆ ಅಭಿಪ್ರಾಯಗಳಿರುತ್ತವೆ. ಕೆಲವೊಮ್ಮೆ ನಮ್ಮ ತೀರ್ಪುಗಳಲ್ಲಿ ಹುರುಳಿಲ್ಲದೇ ಇದ್ದರೂ, ತರಗತಿ ಕೋಣೆಯಿಂದ ಶೈಕ್ಷಣಿಕ ನೀತಿಗಳವರೆಗೂ ನಮ್ಮ ತೀರ್ಪುಗಳು ಸಾಮಾನ್ಯವಾಗಿ ಮೇಲ್ನೋಟದ್ದಾಗಿರುತ್ತವೆ. ಅಲ್ಲದೆ, ನಮ್ಮ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಸಂಕೀರ್ಣತೆಯನ್ನು ನಾವು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ವರ್ಣ ಪಂಕ್ತಿಯ ಒಂದು ತುದಿಯಲ್ಲಿ ಇರುವ ತರಗತಿ ಕೋಣೆಯು ವಿಸ್ಮಯಕಾರಿ ಸ್ಥಳವಾಗಿದ್ದು, ವಿದ್ಯಾರ್ಥಿ/ವಿದ್ಯಾರ್ಥಿನಿಯು ತನ್ನ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ, ಭಾವನಾತ್ಮಕ ಮತ್ತು ಬೌದ್ಧಿಕ ಮನೋಧರ್ಮ, ಕಲಿಕೆಯ ಜವಾಬ್ದಾರಿ ಹಾಗೂ ವಿವಿಧ ಆಸಕ್ತಿಗಳು, ಸಾಮರ್ಥ್ಯಗಳು ಮತ್ತು ಇತಿಮಿತಿಗಳೊಂದಿಗೆ ತನ್ನದೇ ಆದ ರೀತಿಯಲ್ಲಿ ವೈವಿಧ್ಯಮಯಗೊಳಿಸುತ್ತಾರೆ. ಈ ದೇಶದ ಶಿಕ್ಷಣ ವ್ಯವಸ್ಥೆಯನ್ನು ನಾವು ಪರಿಗಣಿಸಿದರೆ, ಸಚಿವಾಲಯದ ಬೃಹತ್ ವ್ಯವಸ್ಥೆಯ ರಚನೆ ಮತ್ತು ಆಡಳಿತ ನಿಭಾಯಿಸುವಲ್ಲಿನ ಸಂಕೀರ್ಣತೆಗಳು, ನಿರ್ದೇಶನಾಲಯಗಳು, ಕೇಂದ್ರ ಮತ್ತು ರಾಜ್ಯ ಮಟ್ಟಗಳ ಪರೀಕ್ಷಾ ಮಂಡಳಿಗಳು, ಜಿಲ್ಲೆ ಮತ್ತು ಉಪ ಜಿಲ್ಲಾ ಮಟ್ಟದಲ್ಲಿನ ಮೂಲಭೂತ ಆಡಳಿತ ನಿರ್ವಹಣೆ ವ್ಯವಸ್ಥೆಗಳು ಹಾಗೂ ಸ್ಥಳೀಯ ಆಡಳಿತಗಳೊಂದಿಗಿನ ತಳಮಟ್ಟದ ಕಾರ್ಯಕ್ರಮಗಳು, ಪೋಷಕರು, ಶಿಕ್ಷಕ ಸಮುದಾಯಗಳು ಮತ್ತು ಶಾಲಾ ಆಡಳಿತ– ಹೀಗೆ ಅದು ದೈತ್ಯಾಕಾರದಲ್ಲಿದೆ. ಸಂಸತ್ತಿನಿಂದ ಪೋಷಕರವರೆಗೆ ಒಂದಲ್ಲ ಒಂದು ಹಂತದಲ್ಲಿ ಎಲ್ಲರೂ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಭಾಗೀದಾರರು (ಸ್ಟೇಕ್ ಹೋಲ್ಡರ್ಸ್). ನಾವು ಶೈಕ್ಷಣಿಕ ಸುಧಾರಣೆಯ ಬಗ್ಗೆ ಮಾತನಾಡುವಾಗ ಅಂತಹ ಸಂಕೀರ್ಣತೆ ಮತ್ತು ಪ್ರಮಾಣ ಹೊಂದಿರುವ ಈ ಬೃಹತ್ ವ್ಯವಸ್ಥೆಯಲ್ಲಿನ ಸವಾಲುಗಳನ್ನು ಅಲಕ್ಷಿಸುತ್ತೇವೆ.

'ಸರ್ವರಿಗೂ ಶಿಕ್ಷಣ'ವನ್ನು (ಇಎಫ್ಎ (EFA–ಎಜ್ಯುಕೇಶನ್ ಫಾರ್ ಆಲ್) ಅಪ್ಪಿಕೊಂಡಿರುವ, ಅಂತರರಾಷ್ಟ್ರೀಯ ಉಪಕ್ರಮದಡಿ 'ಪ್ರತಿ ಸಮಾಜದ ಪ್ರತಿ ನಾಗರಿಕನಿಗೆ ಶಿಕ್ಷಣ'ದ ಪ್ರಯೋಜನ ಸಿಗಬೇಕು ಎಂದುಕೊಳ್ಳಲಾಗಿರುವ ಮತ್ತು ಈ ಹಿಂದೆ ಎಂದೂ ಶಾಲೆಯ ಮುಖ ನೋಡದ ಸಮುದಾಯಗಳ ಮಿಲಿಯನ್ ಗಟ್ಟಲೆ ಮಕ್ಕಳನ್ನು ಇತಿಹಾಸದಲ್ಲೇ ಮೊದಲ ಬಾರಿಗೆ ಶಿಕ್ಷಣ ಪಡೆಯುವಂತೆ ಆಹ್ವಾನಿಸಲಾಗಿರುವ ಪ್ರಸ್ತುತ ಪರಿಸ್ಥಿತಿಯಲ್ಲಿ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಕುರಿತು ವ್ಯಕ್ತವಾಗುತ್ತಿರುವ ಒಟ್ಟಾರೆ ನಕಾರಾತ್ಮಕ ಅಭಿಪ್ರಾಯಗಳ ಫಲವಾಗಿ ಸೃಷ್ಟಿಯಾಗಿರುವ ಪ್ರತಿಕೂಲ ವಾತಾವರಣವು, ಶಿಕ್ಷಕರು ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುವ ಇತರರನ್ನು ನಿರುತ್ಸಾಹಗೊಳಿಸುತ್ತದೆ. ಯಾವುದರಲ್ಲಿ ಕೊರತೆ ಇದೆ ಎಂಬ ಕುರಿತ ಕಾಳಜಿಯಲ್ಲಿನ ಕೊರತೆ ಏನೆಂದರೆ, ನಮ್ಮ ಶೈಕ್ಷಣಿಕ ವ್ಯವಸ್ಥೆಯಲ್ಲಿನ ಅಸಾಧಾರಣ ಪರಿಶ್ರಮಗಳು ಮತ್ತು ಸಾಧನೆಗಳನ್ನು ಗಮನಿಸಲು ನಾವು ವಿಫಲರಾಗುವುದು ಹಾಗೂ 6 ರಿಂದ 14 ವರ್ಷದೊಳಗಿನ ಎಲ್ಲಾ ಮಕ್ಕಳು ಶಿಕ್ಷಣ ಪಡೆಯುವುದು ಅವರ ಮೂಲಭೂತ ಹಕ್ಕು ಎಂಬ ನೀತಿಯನ್ನು ಜಾರಿಗೆ ತರಲು ಪ್ರಾಮಾಣಿಕ ಪ್ರಯತ್ನ, ಸಾಧನೆಗಳನ್ನು ಮಾಡಿದ್ದರೂ ಅವುಗಳನ್ನು ಗುರುತಿಸುವಲ್ಲಿ ನಾವು ವಿಫಲರಾಗುವುದು. ಆದರೆ ನಮ್ಮ ಶೈಕ್ಷಣಿಕ ವ್ಯವಸ್ಥೆಯು ನೀತಿಗಳನ್ನು ಉಳಿಸಿಕೊಳ್ಳಲು ಮಾಡಬಹುದಾದ ಎಲ್ಲಾ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದೆ. ಅದನ್ನು ಅಳವಡಿಸಿಕೊಳ್ಳುವ ಹೊತ್ತಿಗೆ, ಶೈಕ್ಷಣಿಕ ವ್ಯವಸ್ಥೆ ಸಂಪೂರ್ಣವಾಗಿ ಸಿದ್ಧವಾಗಿರಲಿಲ್ಲವಾದರೂ, ಉಪಕ್ರಮವನ್ನು ಉಳಿಸಿಕೊಳ್ಳಲು ಎಲ್ಲಾ ಪ್ರಯತ್ನಗಳನ್ನು ಮಾಡಲಾಗಿತ್ತು.

2008–2010ರಲ್ಲಿ ಉತ್ತರಾಖಂಡದಲ್ಲಿ ಕೈಗೊಳ್ಳಲಾದ ಮಹತ್ವದ ಪ್ರಯತ್ನವೊಂದರ ಬಗ್ಗೆ ವಿವರಿಸುವ ಮೂಲಕ, ನಮ್ಮ ದೇಶದಲ್ಲಿ ಶಿಕ್ಷಣದ ಸ್ಥಿತಿಗತಿ ಕುರಿತಾದ ನಕಾರಾತ್ಮಕ ಚರ್ಚೆಗಳಿಗೆ ಉತ್ತರ ನೀಡುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ. ದೇಶದಾದ್ಯಂತ ಇಂತಹ ಎಷ್ಟೋ ಪ್ರಕರಣಗಳು ಗಮನಕ್ಕೆ ಬಾರದೆ ಮತ್ತು ಗುರುತಿಸಲ್ಪಡದೆ ಉಳಿದಿವೆ. ಅಂತಹ ಪ್ರಯತ್ನಗಳಲ್ಲಿ ಇದೂ ಒಂದು ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು.

## ಶಿಕ್ಷಕರ ತರಬೇತಿಯ ಪರಿಷ್ಕರಣೆ ಅವಶ್ಯ

ಉತ್ತರಾಖಂಡ ರಾಜ್ಯವು ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಮಂಡಳಿ (ಎಸ್ ಸಿಇಆರ್ ಟಿ) ಮೂಲಕ ಶಾಲಾ ಶಿಕ್ಷಣದ ದರ್ಘಾವಧಿ ಸುಧಾರಣಾ ಪ್ರಯತ್ನವಾಗಿ ಕೈಗೊಂಡ ಕ್ರಮದ ಕಥನ ಇದು. ಇದನ್ನು ಅರ್ಥೈಸಿಕೊಳ್ಳಬೇಕಾದರೆ, ರಾಜ್ಯ ಮಟ್ಟದಲ್ಲಿ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಸಂರಚನೆಯನ್ನು ಅರ್ಥಮಾಡಿಕೊಳ್ಳಬೇಕಾದುದು ಅತ್ಯಗತ್ಯ.

ಎಸ್ ಸಿಇಆರ್ ಟಿಯ ನೇತೃತ್ವದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿ (ಆರ್ ಅಂಡ್ ಡಿ) ಕ್ರಮಗಳನ್ನು ಕೈಗೊಂಡು, ಶಾಲಾ ಶಿಕ್ಷಣದ ಗುಣಮಟ್ಟ ಹೆಚ್ಚಿಸುವ ನಿಟ್ಟಿನಲ್ಲಿ ಶೈಕ್ಷಣಿಕ ಸಂಪನ್ಮೂಲದ ಬೆಂಬಲ ನೀಡಲಾಗುತ್ತದೆ. ನಂತರ ಅಲ್ಲಿ, ಕ್ರಮವಾಗಿ ನೀತಿ ನಿಯಮ, ಪ್ರಕ್ರಿಯೆಗಳಿಗೆ ಸಚಿವಾಲಯ (ಸೆಕ್ರೆಟರಿಯೇಟ್) ಮತ್ತು ನಿರ್ದೇಶನಾಲಯ ಇರುತ್ತದೆ. ಪೂರಕವಾಗಿ, ಈ ಎಲ್ಲಾ ಯೋಜನೆಗಳಿಗೆ ವೇಗವರ್ಧಕದಂತೆ ಕೆಲಸ ಮಾಡಲು ಕೆಲವು ಘಟಕಗಳು ಮತ್ತು ಇಲಾಖೆಗಳಿರುತ್ತವೆ. ಈ ಘಟಕಗಳು ಪರಸ್ಪರ ಸಮನ್ವಯದಿಂದ ಕೆಲಸ ಮಾಡುವುದು ಕಡ್ಡಾಯವಾದರೂ, ಬಹುತೇಕ ಅವು ಪ್ರತ್ಯೇಕವಾಗಿ ಕೆಲಸ ಮಾಡುತ್ತಿರುವಂತೆಯೇ ತೋರುತ್ತವೆ. ಆದ್ದರಿಂದ, ಇವುಗಳನ್ನು ಸಂಯೋಜಿತ ರೀತಿಯಲ್ಲಿ ಪ್ರಯತ್ನಿಸಿ ಒಗ್ಗೂಡಿಸಲು ರಾಜಕೀಯ ಮತ್ತು ಅಧಿಕಾರಶಾಹಿಯ ಮಟ್ಟದಲ್ಲಿ ಬದ್ಧತೆಯ ಮೂಲಭೂತ ಅವಶ್ಯಕತೆ ಇದೆ. 2008–

2010ನೇ ಸಾಲಿನಲ್ಲಿ ಉತ್ತರಾಖಂಡ ರಾಜ್ಯದಲ್ಲಿ ಈ ಬಗೆಯ ಅಪೇಕ್ಷಿತ ಬದಲಾವಣೆಯನ್ನು ದೊಡ್ಡ ಪ್ರಮಾಣದಲ್ಲಿ ಸಾಧಿಸಲಾಯಿತು. ಶಾಲಾ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳಾಗಿದ್ದ ಡಾ.ರಾಕೇಶ್ ಕುಮಾರ್, ಇಡೀ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಅಗತ್ಯವಾದ ಕಾರ್ಯತಂತ್ರಗಳನ್ನು ರೂಪಿಸಿದರು. ಔಪಚಾರಿಕ ಶಾಲಾ ವ್ಯವಸ್ಥೆಯ ಗುಣಮಟ್ಟದಲ್ಲಿ ಸುಧಾರಣೆ ತರುವ ಹರಿಕಾರರು ಶಿಕ್ಷಕರೇ ಆಗಿದ್ದಾರೆ ಎಂಬುದನ್ನು ಅವರು ಮನಗಂಡರು. ಭಾರತದ ಸಂದರ್ಭದಲ್ಲಿ, ಅಸಮರ್ಪಕ ಮತ್ತು ದುರ್ಬಲವಾದ ಶಿಕ್ಷಕರ ತರಬೇತಿಯತ್ತವೇ ಬೆರಳು ನೆಟ್ಟಿರುತ್ತದೆ. ಶಿಕ್ಷಕರಲ್ಲಿ ವೃತ್ತಿಪರ ಅಭಿವೃದ್ಧಿಯನ್ನು ಮುಂದುವರಿಸಲು ಶಿಕ್ಷಕರ ತರಬೇತಿ ಮತ್ತು ಸೇವಾಂತರ್ಗತ ಕಾರ್ಯಕ್ರಮಗಳಿಗೆ ಅಧಿಕಾರಿವರ್ಗದಿಂದಲೇ ಅವಕಾಶ/ಅನುಮತಿ ಸಿಗಬೇಕಾದುದರಿಂದ ಅವುಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರುವಲ್ಲಿ ವಿಫಲರಾಗಿದ್ದೇವೆ. ಯಾಕೆಂದರೆ, ಈ ವ್ಯವಸ್ಥೆ ಕಾರ್ಯ ನಿರ್ವಹಿಸುವುದೇ ಹಾಗೆ. ಇದನ್ನು ಅರ್ಥ ಮಾಡಿಕೊಳ್ಳುವಲ್ಲಿ ಡಾ.ರಾಕೇಶ್ ಕುಮಾರ್ ಸಫಲರಾದರು. 'ಶಿಕ್ಷಕರ ತಯಾರಿ'ಯ ಸಮಸ್ಯೆ ಬಗೆಹರಿಸಲು ಸಫಲರಾದರೆ, ಶಾಲೆಗಳಲ್ಲಿ ಗುಣಮಟ್ಟದ ಶಿಕ್ಷಣ ನೀಡುವ ಪ್ರಕ್ರಿಯೆಯಲ್ಲಿ ಒಂದು ಹೆಜ್ಜೆ ಮುಂದಿಟ್ಟಂತಾಗುತ್ತದೆ ಎಂದು ಅವರು ಮನಗಂಡರು.

2000ನೇ ಇಸವಿಯಲ್ಲಿ ರಚನೆಯಾದ ಉತ್ತರಾಖಂಡ ರಾಜ್ಯವು, ಉತ್ತರಪ್ರದೇಶದ 'ಎಲಿಮೆಂಟರಿ ಶಿಕ್ಷಣದ ಸೇವಾಪೂರ್ವ ಶಿಕ್ಷಕ ತರಬೇತಿದಾರ' ಎಂದು ಗುರುತಿಸಿಕೊಂಡಿದೆ. ನಮ್ಮ ದೇಶದಲ್ಲಿ ವಿಶೇಷವಾಗಿ ಎಲಿಮೆಂಟರಿ ಶಿಕ್ಷಕರ ಸಿದ್ಧತಾ ಕೋರ್ಸ್ ಎಂಬ ಬುನಾದಿ ತರಬೇತಿಯೊಂದು ಇತ್ತು. ಅದನ್ನು ಈಗ ಸಾರ್ವತ್ರಿಕವಾಗಿ, 'ಎಲಿಮೆಂಟರಿ ಶಿಕ್ಷಣದ ಡಿಪ್ಲೊಮಾ' (ಡಿಪ್ಲೊಮಾ ಇನ್ ಎಲಿಮೆಂಟರಿ ಎಜ್ಯುಕೇಶನ್– ಡಿ.ಎಲ್.ಎಡ್) ಎಂದು ಕರೆಯಲಾಗುತ್ತಿದೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005ರ (ಎನ್ ಸಿಎಫ್ 2005) ಪರಿಚಯ (ಮುನ್ನುಡಿ), ಅದರೊಂದಿಗೆ ಶಿಕ್ಷಕರ ಶಿಕ್ಷಣದಲ್ಲಿ ಸುಧಾರಣೆ ತರಲು ನಡೆದ ನಂತರದ ಚರ್ಚೆಗಳು, ನಂತರ ಶಿಕ್ಷಕರ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ಎನ್ ಸಿಎಫ್ ಟಿಇ) 2009ರಲ್ಲಿ ಸಮಾಪ್ತಿಗೊಂಡರೂ, ಅದು ರಾಜ್ಯದಲ್ಲಿ ಸೇವಾ ಪೂರ್ವ ಶಿಕ್ಷಕರ ಶಿಕ್ಷಣದ ಮೇಲೆ ಪ್ರಭಾವ ಬೀರಲು ಬದ್ಧವಾಗಿತ್ತು. ಇಂತಹ ಸಂದಿಗ್ಧ ಕಾಲದಲ್ಲಿ, ಬುನಾದಿ ತರಬೇತಿ ಪ್ರಮಾಣಪತ್ರ (ಬೇಸಿಕ್ ಟ್ರೈನಿಂಗ್ ಸರ್ಟಿಫಿಕೇಟ್– ಬಿಟಿಸಿ) ಕೋರ್ಸ್ ನಲ್ಲಿ ಸುಧಾರಣೆ ತರುವ ಪ್ರಯತ್ನವನ್ನು ಡಾ.ರಾಕೇಶ್ ಕುಮಾರ್ ಮಾಡಿದರು. ಎನ್ ಸಿಇಆರ್ ಟಿ ಕೂಡ ಶಿಕ್ಷಕರ ತರಬೇತಿಯ ಪಠ್ಯಕ್ರಮವನ್ನು ಪರಿಷ್ಕರಿಸುವ ಅವಶ್ಯಕತೆಯನ್ನು ಮನವರಿಕೆ ಮಾಡಿಕೊಂಡಿದ್ದರಿಂದ, ಈ ನಿಟ್ಟಿನಲ್ಲಿ ಮುಂದಾಳತ್ವ ವಹಿಸಿಕೊಂಡಿತು. ಈ ಪ್ರಯತ್ನವನ್ನು ಕಾರ್ಯರೂಪಕ್ಕೆ ತರುವಂತೆ ಅಜೀಂ ಪ್ರೇಮ್ ಜಿ ಫೌಂಡೇಷನ್ ಗೆ (ಇನ್ನು ಮುಂದೆ ಫೌಂಡೇಷನ್ ಎಂದಷ್ಟೇ ಉಲ್ಲೇಖಿಸಲಾಗುವುದು) ಆದೇಶ ನೀಡಲಾಯಿತು.

ಆಗ ಇನ್ನೂ ಎನ್ಸಿಎಫ್ಟಿಇ 2009 ಕಾರ್ಯರೂಪಕ್ಕೆ ಬಾರದೇ ಇದ್ದುದರಿಂದ, ಪಠ್ಯಕ್ರಮದಲ್ಲಿನ ಬದಲಾವಣೆಗೆ ಈ ಕೆಳಗಿನ ಕ್ರಮಗಳನ್ನು ಕೈಗೊಳ್ಳಲಾಯಿತು:

**ಒಬ್ಬ ಉತ್ತಮ ಶಿಕ್ಷಕ...**

- ವಿಷಯದ ಜ್ಞಾನ ಮತ್ತು ಅರ್ಥ ಮಾಡಿಕೊಂಡಿರಬೇಕು
- ಶಿಕ್ಷಣ ಶಾಸ್ತ್ರೀಯ (ಬೋಧನೆ) ಕೌಶಲಗಳು ವಿಷಯಕ್ಕೆ ತಕ್ಕುದಾಗಿರಬೇಕು
- ಬೋಧನೆ/ಕಲಿಕೆಯ ಸಂಪನ್ಮೂಲಗಳನ್ನು ಪಡೆಯಲು ಮತ್ತು ಅಭಿವೃದ್ಧಿಪಡಿಸುವ ಸಾಮರ್ಥ್ಯ ಹೊಂದಿರಬೇಕು
- ಕಲಿಕಾರ್ಥಿಗಳ ಬಗ್ಗೆ ಮತ್ತು ಅವರನ್ನು ಗೌರವಿಸುವಷ್ಟು ಸಂವೇದನಾಶೀಲರಾಗಿರಬೇಕು
- ಸಮಾಜ, ಶಿಕ್ಷಣ ಮತ್ತು ಮಕ್ಕಳ ಕುರಿತ ಕಾಣ್ಕೆ ಮತ್ತು ಅರ್ಥೈಸುವಿಕೆ ಇರಬೇಕು.

**ಗಂಭೀರವೆಂದು ಪರಿಗಣಿಸಲಾದ ಬದಲಾವಣೆಗಳು ಹೀಗಿವೆ:**

- ಹೊಸ ಶಿಕ್ಷಕರು ವೃತ್ತಿ ಕ್ಷೇತ್ರ ಪ್ರವೇಶಿಸುವಾಗ, ಶಿಕ್ಷಣದ ಗುರಿ ತಲುಪಲು ಸಹಾಯಕವಾಗುವ ದೂರದೃಷ್ಟಿ, ಸಾಮರ್ಥ್ಯ ಮತ್ತು ಪ್ರೇರಣಾ ಭಾವ ಹೊಂದಿರುತ್ತಾರೆ.
- ಸೇವಾನಿರತ ಶಿಕ್ಷಕರು ವೃತ್ತಿಪರ ಅಭಿವೃದ್ಧಿ ಕಾರ್ಯಕ್ರಮಗಳು ಅರ್ಥಪೂರ್ಣವೆಂದು ಭಾವಿಸುತ್ತಾರೆ.
- ಶಿಕ್ಷಕರ ಸಿದ್ಧತೆ, ಬೆಳವಣಿಗೆ ಮತ್ತು ಬೆಂಬಲದಲ್ಲಿ ಒಂದು ಮಾದರಿ ಬದಲಾವಣೆ ಅಗತ್ಯ.

## ಶಿಕ್ಷಕರ ತರಬೇತಿಗೆ ವಿಭಿನ್ನ ಸ್ಪರ್ಶ

ಇವುಗಳನ್ನೆಲ್ಲಾ ರೂಢಿಗೆ ತಂದುದು ಒಂದು ದೊಡ್ಡ ಕತೆ. 30 ಸಂಪನ್ಮೂಲ ವ್ಯಕ್ತಿಗಳ ಒಂದು ಪ್ರಮುಖ ತಂಡವನ್ನು ರಾಜ್ಯದೆಲ್ಲೆಡೆಯಿಂದ ಈ ಕಾರ್ಯಕ್ಕಾಗಿಯೇ ಆಯ್ದು ತರಲಾಯಿತು. ಶಿಕ್ಷಕರಿಂದ ಹಿಡಿದು ಶಿಕ್ಷಣ ಕ್ಷೇತ್ರದ ಹಿರಿಯರವರೆಗೂ ಬೇರೆ ಬೇರೆ ರೀತಿಯ ಅನುಭವ ಹೊಂದಿದವರು ಈ ತಂಡದಲ್ಲಿದ್ದರು. ಶಿಕ್ಷಕರ ತರಬೇತಿಯಲ್ಲಿ ಹೇಗೆ ಸುಧಾರಣೆ ತರಬೇಕು ಮತ್ತು ಪುನರುಜ್ಜೀವನ ನೀಡಬೇಕು ಎಂಬ ಬಗ್ಗೆ ತಂಡ ವ್ಯಾಪಕ ಚರ್ಚೆ–ಸಂವಾದ ನಡೆಸಿತು. ಹೊಸ ಆಲೋಚನೆಗಳಿಗೆ ಅಲ್ಲಿ ಮುಕ್ತ ಅವಕಾಶವಿತ್ತು. ಅಲ್ಲದೆ, ಏಕಲವ್ಯ, ದಿಗಂತರ್ ಮತ್ತು ವಿದ್ಯಾಭವನದಂತಹ ಪ್ರಮುಖ ಸಂಸ್ಥೆಗಳ ಸಂಪನ್ಮೂಲ ವ್ಯಕ್ತಿಗಳ ಮೂಲಕ ಈ ತಂಡಕ್ಕೆ ಪರಿಚಯಾತ್ಮಕ ಕಾರ್ಯಕ್ರಮವನ್ನೂ ಫೌಂಡೇಷನ್ ಹಮ್ಮಿಕೊಂಡಿತು. ಹೊಸದಾಗಿ ರಚನೆಯಾಗಿದ್ದ ಛತ್ತೀಸ್ ಗಢ ರಾಜ್ಯದಲ್ಲಿ ಎಲಿಮೆಂಟರಿ ಶಿಕ್ಷಣ ಡಿಪ್ಲೊಮಾದ ಪಠ್ಯಕ್ರಮವನ್ನು ಹೇಗೆ ಪರಿಷ್ಕರಿಸುತ್ತಾರೆ ಎಂಬ ಬಗ್ಗೆಯೂ ಈ ತಂಡ ಸೂಕ್ಷ್ಮವಾಗಿ ಗಮನಿಸುತ್ತಿತ್ತು.

ಮುಖ್ಯ ಗುಂಪು ಹಿಂದಿನ ಪಠ್ಯಕ್ರಮವನ್ನು ಪರಾಮರ್ಶಿಸಿ, ಎನ್ ಸಿಎಫ್ 2005ರೊಂದಿಗೆ ಹೊಂದಿಸಲು ಅಗತ್ಯ ಸಲಹೆ ಮತ್ತು ಬದಲಾವಣೆಗಳನ್ನು ಸೂಚಿಸಿತು. ಕೆಲವು ಸದಸ್ಯರು ಉತ್ತರಪ್ರದೇಶದ, ಹಳೆಯ ಬಿಟಿಸಿ ಪಠ್ಯಕ್ರಮದಲ್ಲಿ ಮೌಲ್ಯಗಳನ್ನು ಕಂಡಿದ್ದರಿಂದ ಮತ್ತು ಅದಕ್ಕೆ ಕೆಲವು ತಿದ್ದುಪಡಿಗಳನ್ನು ಸೂಚಿಸಿದ್ದರಿಂದ, ತೀವ್ರ ವಾದ ಪ್ರತಿವಾದ ಮತ್ತು ಚರ್ಚೆಗಳು ನಡೆದವು. ಮತ್ತೊಂದೆಡೆ, ಇನ್ನು ಕೆಲವು ಸದಸ್ಯರು ಇಡೀ ಪಠ್ಯಕ್ರಮವನ್ನು ಎನ್ ಸಿಎಫ್ 2005ಕ್ಕೆ ಅನುಸಾರವಾಗಿ ಸಂಪೂರ್ಣವಾಗಿ ಪರಿಷ್ಕರಿಸಬೇಕು ಎಂದು ವಾದಿಸಿದರು. ಈ ವಾದ ಪ್ರತಿವಾದಗಳು ಮತ್ತು ಚರ್ಚೆಗಳ ನಂತರ ಎರಡನೆಯ ಗುಂಪಿನ ಅಭಿಪ್ರಾಯಕ್ಕೆ ಮನ್ನಣೆ ಸಿಕ್ಕಿತು. ಎಸ್ ಸಿಇಆರ್ ಟಿಯ ನೇತೃತ್ವ ವಹಿಸಿದ್ದ ಮತ್ತು ಶಿಕ್ಷಣ ಕ್ಷೇತ್ರದ ಅಪಾರ ಅನುಭವವನ್ನೂ, ಪಠ್ಯಕ್ರಮದಲ್ಲಿ ಅಪೇಕ್ಷಿತ ಅಂಶಗಳನ್ನು ಅಳವಡಿಸಲು ಬೇಕಾದ ದೂರದೃಷ್ಟಿಯನ್ನೂ ಹೊಂದಿದ್ದ ಹೆಚ್ಚುವರಿ ನಿರ್ದೇಶಕರಾದ ಎನ್.ಎನ್.ಪಿ.ಪಾಂಡೆ ಅವರು ಆ ಗುಂಪಿನ ಮುಂದಾಳತ್ವ ವಹಿಸಿದ್ದುದು ಇದಕ್ಕೆ ಕಾರಣವಾಗಿರಬಹುದು.

ನವೀಕರಿಸಿದ ಪಠ್ಯಕ್ರಮದೊಂದಿಗೆ ಕೈಜೋಡಿಸಲಿ ಎಂಬ ಉದ್ದೇಶದಿಂದ ಉತ್ತರಾಖಂಡ ಪರೀಕ್ಷಾ ಮಂಡಳಿಯೊಂದಿಗೆ ಈ ವೇಳೆ ಸಮನ್ವಯ ಸಾಧಿಸಲಾಗಿತ್ತು.

ಪಠ್ಯಕ್ರಮ ಅಭಿವೃದ್ಧಿಪಡಿಸಲು ಸುಮಾರು ಒಂದು ವರ್ಷವೇ ಬೇಕಾಯಿತು. ವಿವಿಧ ಗುಂಪುಗಳು ಶಿಕ್ಷಣದ ದೃಷ್ಟಿಕೋನದಿಂದ ವಿಷಯಗಳ ಸ್ವರೂಪದವರೆಗೆ ಬೇರೆ ಬೇರೆ ನೆಲೆಗಳಲ್ಲಿ ಕಾರ್ಯ ನಿರ್ವಹಿಸಿದವು. ಯಾವುದೇ ಉಪನ್ಯಾಸಗಳನ್ನು ಸೇರಿಸಿಕೊಳ್ಳದಿರುವ ನಿರ್ಧಾರಕ್ಕೆ ಬರಲಾಗಿತ್ತು. ಈ ತರಬೇತಿ ಕಾರ್ಯಕ್ರಮಕ್ಕೆ ಪಠ್ಯಪುಸ್ತಕಗಳೂ ಬೇಡ ಎಂಬ ಪ್ರಜ್ಞಾಪೂರ್ವಕ ನಿರ್ಧಾರವನ್ನೂ ತೆಗೆದುಕೊಳ್ಳಲಾಗಿತ್ತು. ಆದ್ದರಿಂದ, ತರಗತಿ ಕೋಣೆಯ ಅಭ್ಯಾಸಕ್ರಮಕ್ಕೆ ಇದು ಸಂಪೂರ್ಣವಾಗಿ ವಿಭಿನ್ನವಾದ ನಡೆಯೇ ಆಗಿತ್ತು.

## ಪಠ್ಯಕ್ರಮದಿಂದ ಅಭ್ಯಾಸದವರೆಗೆ

ಪಠ್ಯಕ್ರಮ ಸಿದ್ಧವಾದ ತಕ್ಷಣ, ಪರಿಷ್ಕೃತ ಪಠ್ಯಕ್ರಮವನ್ನು ಸಮರ್ಪಕವಾಗಿ ಅಳವಡಿಸಿಕೊಳ್ಳುವ ಉದ್ದೇಶದಿಂದ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯಲ್ಲಿ (ಡಯಟ್) ಮೂಲಭೂತ ಸೌಕರ್ಯ ಮತ್ತು ಮಾನವ ಸಂಪನ್ಮೂಲವನ್ನು ಅಣಿಗೊಳಿಸಬೇಕಾಗಿತ್ತು. ಡಯಟ್ ಗಳಲ್ಲಿರುವ ಮೂಲಸೌಕರ್ಯಗಳು ಮತ್ತು ಮಾನವ ಸಂಪನ್ಮೂಲದ ಸಮೀಕ್ಷೆಯನ್ನು ಕೈಗೊಳ್ಳಲಾಯಿತು. ಆಗ ರಾಜ್ಯದಲ್ಲಿ 10 ಡಯಟ್ ಗಳು ಹಾಗೂ 3 ಜಿಲ್ಲಾ ಸಂಪನ್ಮೂಲ ಕೇಂದ್ರಗಳು (ಮಿನಿ ಡಯಟ್ ಅಥವಾ ಡಿಆರ್ ಸಿ ಎಂದೂ ಕರೆಯಲಾಗುತ್ತದೆ) ಇದ್ದು, ಎಲ್ಲ ಕಡೆ ಮೂಲಸೌಕರ್ಯ ಹಾಗೂ ಮಾನವ ಸಂಪನ್ಮೂಲದ ಕೊರತೆ ಇರುವುದು ಸಮೀಕ್ಷೆಯಲ್ಲಿ ಕಂಡುಬಂತು. ಡಯಟ್ ಗಳಲ್ಲಿ ಬಳಕೆಯಾಗದೆ ಉಳಿದ ಅನುದಾನ ಲಭ್ಯವಿದ್ದರೆ ಮೂಲಸೌಕರ್ಯ ಒದಗಿಸಲು ಉಪಯೋಗಿಸಬಹುದು ಎಂದು ವಿಶ್ಲೇಷಿಸಲಾಯಿತು. ಈ ವಿಶ್ಲೇಷಣೆಯಲ್ಲಿ ಫೌಂಡೇಷನ್ ನಿರ್ಣಾಯಕ ಪಾತ್ರವಹಿಸಿತು. ಸಂಸ್ಥೆಗಳಲ್ಲಿ ಅಪೇಕ್ಷಿತ ಮಾನವ ಸಂಪನ್ಮೂಲ ಲಭ್ಯವಾಗುವಂತೆ ಮಾಡುವ ಹೊಣೆಯನ್ನು ನಿರ್ದೇಶನಾಲಯವು ವಹಿಸಿಕೊಂಡಿತು. ಅತ್ಯಲ್ಪ ಅವಧಿಯಲ್ಲಿ ಎಲ್ಲಾ ಸಂಸ್ಥೆಗಳು ಮತ್ತು ಕೇಂದ್ರಗಳು ಮೂಲಸೌಕರ್ಯ ಹಾಗೂ ಮಾನವ ಸಂಪನ್ಮೂಲದೊಂದಿಗೆ ಅಣಿಯಾದವು. ಮೂಲಸೌಕರ್ಯವೆಂದರೆ ಬ್ರಾಡ್ ಬ್ಯಾಂಡ್ ಮತ್ತು ಎಲ್ ಸಿಡಿ ಪ್ರೊಜೆಕ್ಟರ್ ನಂತಹ ಆಧುನಿಕ ತಂತ್ರಜ್ಞಾನಗಳನ್ನೂ ಒಳಗೊಂಡಿತ್ತು. ಗ್ರಂಥಾಲಯಕ್ಕಾಗಿ ಕೆಲವು ಪುಸ್ತಕಗಳ ಪಟ್ಟಿಯನ್ನು ಸಿದ್ಧಪಡಿಸಿದಾಗ, ಎಲ್ಲಾ ಡಯಟ್ ಮತ್ತು ಡಿಆರ್ ಸಿಗಳಿಗೆ ಕೆಲವು ಪುಸ್ತಕಗಳನ್ನು ಒದಗಿಸುವ ಜವಾಬ್ದಾರಿಯನ್ನು ಫೌಂಡೇಷನ್ ವಹಿಸಿಕೊಂಡು, ಪರಿಷ್ಕೃತ ಪಠ್ಯಕ್ರಮದ ಸುಸೂತ್ರ ಅಳವಡಿಕೆ ಸಾಧ್ಯವಾಗುವಂತೆ ಮಾಡಿತು.

ಪಠ್ಯಕ್ರಮದಲ್ಲಿ ಹಾಗೂ ಶಿಕ್ಷಣಶಾಸ್ತ್ರದಲ್ಲಿ ಮಾದರಿ ಬದಲಾವಣೆಗಳು ಇದ್ದುದರಿಂದ ಸಂಸ್ಥೆಗಳ ಮುಖ್ಯಸ್ಥರು ಮತ್ತು ಬೋಧಕರನ್ನು ಪುನಶ್ಚೇತನಗೊಳಿಸುವ ಅಗತ್ಯವಿತ್ತು. ಅದಕ್ಕಾಗಿ, ಸಂಸ್ಥೆಗಳ ಮುಖ್ಯಸ್ಥರಿಗೆ ಆಡಳಿತಾತ್ಮಕ ಮತ್ತು ಅಕಾಡೆಮಿಕ್ ಕಾರ್ಯಗಳನ್ನು ಕೈಗೊಳ್ಳುವ ಸಂಬಂಧ ಪುನಶ್ಚೇತನ ನೀಡಲಾಯಿತು. ಅದು ಬಹುತೇಕ ಈ ಕೆಳಗಿನ ಅಂಶಗಳನ್ನು ಒಳಗೊಂಡಿತ್ತು:

- ನಿರ್ವಹಣೆ ಮತ್ತು ಯೋಜನೆ
- ಬೋಧಕರೊಂದಿಗೆ ಸಮನ್ವಯ
- ಪಠ್ಯಕ್ರಮದ ನಿರ್ವಹಣೆಯ ಮೇಲ್ವಿಚಾರಣೆ
- ವಾರಕ್ಕೊಮ್ಮೆ ಕೇಂದ್ರದೊಳಗೆ ಸಭೆ
- ಎಸ್ ಸಿಇಆರ್ ಟಿಗೆ ಆಡಳಿತಾತ್ಮಕ ಮತ್ತು ಅಕಾಡೆಮಿಕ್/ಶೈಕ್ಷಣಿಕ ಮಾಹಿತಿಯನ್ನು ಒದಗಿಸುವುದು
- ಸಂಪನ್ಮೂಲದ ನೆರವು
- ಸಂಪರ್ಕದ ಕೆಲಸ
- ತರಬೇತಿಯ ಮೌಲ್ಯಮಾಪನ

ಅಲ್ಲದೆ, ಹೊಸದಾಗಿ ನೇಮಕಗೊಂಡ ಬೋಧಕ ಸಿಬ್ಬಂದಿ, ಪ್ರೌಢಶಾಲೆಯಲ್ಲಿ ಕೆಲಸ ಮಾಡಿದ್ದರಿಂದ ಅವರಿಗೆ ಸೇವಾಪೂರ್ವ ಅಧ್ಯಾಪನದ ಶಿಕ್ಷಣದ ಅನುಭವ ಇರಲಿಲ್ಲ. ಹಾಗಾಗಿ, ತರಬೇತಿಯನ್ನು ಇನ್ನಷ್ಟು ತೀವ್ರಗೊಳಿಸಿ, ಪಠ್ಯಕ್ರಮ ಸಮನ್ವಯದ ಬಗ್ಗೆ ನಿರಂತರವಾಗಿ ಅನುಸರಿಸಬೇಕಾಗಿತ್ತು.

ಆಸಕ್ತಿಯ ಸಂಗತಿಯೆಂದರೆ, ಅಷ್ಟು ಹೊತ್ತಿಗೆ ಎಸ್ ಸಿಇಆರ್ ಟಿಯ ನಾಯಕತ್ವ ಬದಲಾಯಿತು. ಆದರೆ, ಹೊಸದಾಗಿ ನೇಮಕಗೊಂಡಿದ್ದ ಹೆಚ್ಚುವರಿ ನಿರ್ದೇಶಕರಾದ ಎನ್.ಸಿ. ಕಬಡ್ವಾಲ್ ಅವರು, ನಿರ್ಗಮನ ಅಧಿಕಾರಿ ಎನ್,ಎನ್.ಪಿ. ಪಾಂಡೆ ಅವರ ದೃಷ್ಟಿಕೋನಕ್ಕೆ ಸಹಮತವನ್ನು ಹೊಂದಿದ್ದು, ಅದಾಗಲೇ ಪ್ರಗತಿಯಲ್ಲಿದ್ದ ಪ್ರಯತ್ನಗಳನ್ನು ಮುಂದುವರಿಸಿ ಅಪೇಕ್ಷಿತ ದಾರಿಯಲ್ಲಿ ಸಾಗಿದರು. ಪುನಶ್ಚೇತನ ಕರ್ಯಕ್ರಮಗಳು ಸುಲಲಿತವಾಗಿ ಏರ್ಪಾಡಾಗಲು ಮತ್ತು ಬಹುತೇಕ ಗೋಷ್ಠಿಗಳನ್ನು ನಡೆಸಲು ಅವರು ಖುದ್ದು ಭಾಗವಹಿಸಿ ಶ್ರಮವಹಿಸುತ್ತಿದ್ದರು. ಒಂದು ವಲಯದ ಪ್ರತಿ ಡಯಟ್ ನಿಂದ ಬೋಧಕ ಸಿಬ್ಬಂದಿಯ ಒಂದು ತಂಡಕ್ಕೆ ಒಂದು ವಾರ ತುರುಸಿನ ತರಬೇತಿಯನ್ನು ನೀಡಲಾಯಿತು. ನಂತರ ಈ ತಂಡ ತಮ್ಮ ಡಯಟ್ ಕೇಂದ್ರದ ಬೋಧಕ ಸಿಬ್ಬಂದಿಗೆ ಅದೇ ಮಾದರಿಯ ತರಬೇತಿಯನ್ನು ನೀಡುವಂತೆ ಕ್ರಮ ಕೈಗೊಳ್ಳಲಾಯಿತು.

ಈ ಇಡೀ ಪ್ರಕ್ರಿಯೆಯು ಸ್ವಲ್ಪ ಮಟ್ಟಿಗೆ ಕ್ರಾಂತಿಕಾರಿಯಾಗಿತ್ತು. ಈ ಬದಲಾವಣೆಯ ಬಗ್ಗೆ ಕುತೂಹಲವನ್ನು ಜೀವಂತವಾಗಿರಿಸಲು ಎಲ್ಲಾ ಪ್ರಯತ್ನಗಳನ್ನು ಮಾಡಲಾಯಿತು. ಡಯಟ್ ನಲ್ಲಿ ಒಂದು ಹಬ್ಬದ ವಾತಾವರಣ ಕಲ್ಪಿಸುವ ಮೂಲಕ, ಬಿಟಿಸಿ ತರಬೇತಿಯ ಆಕಾಂಕ್ಷಿಗಳು ಹೊಸ ಕೋರ್ಸ್ ನ ಕುತೂಹಲವನ್ನು ಅನುಭವಿಸುವಂತಾಯಿತು. ತರಬೇತಿಯ ಆಕಾಂಕ್ಷಿಗಳನ್ನು ಸ್ವಾಗತಿಸುವ ಬ್ಯಾನರ್ ಗಳನ್ನು ಹಾಕಲಾಗಿತ್ತು. ಒಟ್ಟಾರೆಯಾಗಿ ಹೊಸ ತರಬೇತಿಯಲ್ಲಿ ಪಾಲ್ಗೊಳ್ಳಲು ಆಕಾಂಕ್ಷಿಗಳು ತುದಿಗಾಲಲ್ಲಿ ನಿಂತಿದ್ದರು. ಪರಿಷ್ಕೃತ ಪಠ್ಯಕ್ರಮದ ಸಮನ್ವಯವನ್ನು ಪರಿಶೀಲಿಸಲು ನಿಖರವಾದ ಯೋಜನೆಯೂ ಸಿದ್ಧವಾಗಿತ್ತು. ಎಸ್ ಸಿಇಆರ್ ಟಿ ಹಾಗೂ ಫೌಂಡೇಷನ್ನಿಂದ ತಲಾ ಒಬ್ಬ ಸದಸ್ಯರನ್ನೊಳಗೊಂಡ ಒಂದು ತಂಡ ಡಯಟ್ ಗಳಿಗೆ ಮತ್ತು ಡಿಆರ್‌ಸಿಗಳಿಗೆ ಭೇಟಿ ನೀಡುತ್ತಿತ್ತು. ಈ ತಂಡವು ತರಗತಿ ಕೋಣೆಯ ಕಾರ್ಯ ವಿಧಾನಗಳನ್ನು ಗಮನಿಸಿ, ಬೋಧಕ ಸಿಬ್ಬಂದಿ ಮತ್ತು ವಿದ್ಯಾರ್ಥಿ ಪ್ರಶಿಕ್ಷಣಾರ್ಥಿಗಳೊಂದಿಗೆ ಸಭೆ ನಡೆಸಿತು. ನಂತರದ ಕೋರ್ಸ್ ಗಳಲ್ಲಿ ಈ ಎಲ್ಲಾ ತಂಡಗಳು ರಾಜ್ಯ ಮಟ್ಟದಲ್ಲಿ ಒಟ್ಟಾಗಿ ಕುಳಿತು ಪರಿಷ್ಕೃತ ಪಠ್ಯದ ಸಮನ್ವಯದಿಂದ ಹಿಡಿದು ಸಂಸ್ಥೆಗಳಲ್ಲಿ ಲಭ್ಯವಿರುವ ಮೂಲಸೌಕರ್ಯಗಳ ವರೆಗಿನ ಎಲ್ಲಾ ಮಾಹಿತಿ/ಅನುಭವಗಳನ್ನು ಹಂಚಿಕೊಂಡರು. ಈ ಪ್ರಕ್ರಿಯೆಯು ವಿವಿಧ ಸ್ಥಳಗಳಲ್ಲಿ ಪಠ್ಯಕ್ರಮದ ಕ್ರೋಢೀಕರಣಕ್ಕೆ ಸಂಬಂಧಿಸಿದ ಉತ್ತಮ

ಅಭ್ಯಾಸಗಳನ್ನು ಎತ್ತಿತೋರಿಸಲು ಹಾಗೂ ಹಂಚಿಕೊಳ್ಳಲು ನೆರವಾಯಿತು.

ಬೇರೆ ಬೇರೆ ಭಾಗೀದಾರರಿಂದ ಎಲ್ಲಾ ಬಗೆಯ ಪ್ರತಿಕ್ರಿಯೆಗಳು ವ್ಯಕ್ತವಾದವು. ಆರಂಭದಲ್ಲಿ ಪಠ್ಯಕ್ರಮದಲ್ಲಿ ಮತ್ತು ಶಿಕ್ಷಣಶಾಸ್ತ್ರದಲ್ಲಿನ (ಬೋಧನಾ ವಿಧಾನ) ಬದಲಾವಣೆಯನ್ನು ಒಪ್ಪಿಕೊಳ್ಳಲು ಶಿಕ್ಷಕರಿಗೆ ಕಷ್ಟವಾಯಿತು. ಅದಕ್ಕಾಗಿ, ಎಲ್ಲಾ ಸಂಸ್ಥೆಗಳ ನಡುವೆ ಸಂಪರ್ಕ ಸಾಧಿಸಿ, ಓದುವ ಸಾಮಗ್ರಿಗಳನ್ನು ನಿರಂತರವಾಗಿ ಲಭ್ಯವಾಗುವಂತೆ ಮಾಡಲಾಯಿತು. ಮುಖ್ಯ ವ್ಯಕ್ತಿಗಳಿಗೆ ಇಮೇಲ್ (ಮಿಂಚಂಚೆ) ಮೂಲಕವೂ ಈ ಸಾಮಗ್ರಿಗಳನ್ನು ರವಾನಿಸಲಾಯಿತು. ಛತ್ತೀಸಗಡದ ಎಸ್ ಸಿಇಆರ್ ಟಿಯ ಜಾಲತಾಣದಲ್ಲಿ ಎಲಿಮೆಂಟರಿ ಶಿಕ್ಷಣ ಡಿಪ್ಲೊಮಾದ ಪರಿಷ್ಕೃತ ಪಠ್ಯಕ್ರಮ ಲಭ್ಯವಿದ್ದುದರಿಂದ ಆ ಜಾಲತಾಣವು ಅನೇಕರಿಗೆ ಸಹಾಯವಾಯಿತು. ಈ ಹಂತದಲ್ಲಿ, ಬಾಹ್ಯ ಸಂಪನ್ಮೂಲ ವ್ಯಕ್ತಿಗಳ ಬಳಕೆ, ಸಂಸ್ಥೆಗಳ ನಡುವೆ ಸಂಪನ್ಮೂಲಗಳ ಹಂಚಿಕೆ ಮತ್ತು ವಿದ್ಯಾರ್ಥಿ ಪ್ರಶಿಕ್ಷಣಾರ್ಥಿಗಳ ಪರಿಣತಿಯನ್ನು ಬಳಸಿಕೊಳ್ಳುವಂತಹ ವಿನೂತನ ಸಾಧ್ಯತೆಗಳ ಅರಿವೂ ಆಯಿತು.

ಬೋಧಕ ಸಿಬ್ಬಂದಿ ಸಹಜವಾಗಿ ನಿರಂತರ ಬೆಂಬಲವೊಂದನ್ನು ಅಪೇಕ್ಷಿಸಿದ ಕಾರಣ ಪ್ರಾದೇಶಿಕ ಸಂಪನ್ಮೂಲ ಗುಂಪುಗಳು (ಆರ್‌ಆರ್‌ಜಿ) ಎಂಬ ಪರಿಕಲ್ಪನೆ ಮೂಡಿತು. ಫೌಂಡೇಷನ್, ಡಯಟ್ ಗಳು ಮತ್ತು ಎಸ್ ಸಿಇಆರ್ ಟಿಗಳಿಂದ ಆಯಾ ವಿಷಯಗಳಲ್ಲಿ ಪರಿಣತರಾದ ವಿಷಯವಾರು ಆರ್ ಆರ್ ಜಿಗಳನ್ನು ರಚಿಸಲಾಯಿತು. ಉತ್ತರಾಖಂಡದ ಎರಡೂ ವಲಯಗಳಿಂದ ಅಂದರೆ ಕುಮಾವನ್ ಮತ್ತು ಗರ್‌ವಾಲ್ ವಲಯಗಳಿಂದ ಆರ್ ಆರ್ ಜಿಗಳು ಆಯಾ ಸೆಮಿಸ್ಟರ್ ಗಳನ್ನು ಕೊನೆಯಲ್ಲಿ ನಿರ್ದಿಷ್ಟ ಸ್ಥಳಗಳಲ್ಲಿ ಭೇಟಿಯಾಗಿ, ಆ ಸೆಮಿಸ್ಟರ್ ಗಳನ್ನು ವಿಮರ್ಶಿಸುವುದರ ಜೊತೆಗೆ ಮುಂದಿನ ಸೆಮಿಸ್ಟರ್‌ಗೆ ಯೋಜನೆ ಸಿದ್ಧಪಡಿಸಿದರು. ಇದರಿಂದಾಗಿ ವಿವಿಧ ಸ್ಥಳಗಳಲ್ಲಿನ ಉತ್ತಮ ಅಭ್ಯಾಸಗಳನ್ನು ಪರಸ್ಪರ ಹಂಚಿಕೊಳ್ಳಲು ಅವಕಾಶ ಸಿಕ್ಕಿದಂತಾಯಿತು.

ಪಠ್ಯಕ್ರಮ ಅಭಿವೃದ್ಧಿಯಲ್ಲಿ ಉತ್ತರಾಖಂಡ ಪರೀಕ್ಷಾ ಮಂಡಳಿಯೂ ಪಾಲ್ಗೊಂಡಿದ್ದರಿಂದ, ಸುಧಾರಣೆಯ ಮೌಲ್ಯಮಾಪನವನ್ನೂ ಮಾಹಿತಿ ಮತ್ತು ಉರು ಹೊಡೆಯುವುದಕ್ಕೆ ಕಡಿಮೆ ಒತ್ತು ನೀಡಿ, ಪಠ್ಯಕ್ರಮವನ್ನು ಗ್ರಹಿಸುವುದಕ್ಕೆ ಮತ್ತು ಪಠ್ಯಕ್ರಮವನ್ನು ಅನ್ವಯಿಸುವುದಕ್ಕೆ ಹೆಚ್ಚು ಒತ್ತು ನೀಡುವ ಮಾದರಿಯಲ್ಲೇ ನಡೆಸಲಾಯಿತು.

## ಪಠ್ಯಕ್ರಮದ ಮೌಲ್ಯಮಾಪನ

ಪಠ್ಯಕ್ರಮದ ಬದಲಾವಣೆಯು ವಿದ್ಯಾರ್ಥಿಗಳಲ್ಲಿ ಪರೀಕ್ಷೆಗಳ ವಿಚಾರವಾಗಿ ಒಂದಿಷ್ಟು ಬೇಸರ ಮತ್ತು ಅನಿಶ್ಚಿತತೆ ಮೂಡಿಸಿತು. ಆದರೆ ಮೊದಲ ಸೆಮಿಸ್ಟರ್ ಕೊನೆಯಲ್ಲಿ ಪರಿಷ್ಕೃತ ಪಠ್ಯಕ್ರಮವನ್ನು ಆಧರಿಸಿದ ಪರೀಕ್ಷೆಗಳನ್ನು ಬರೆದು, ಅವರು ಪರಿಷ್ಕೃತ ಮೌಲ್ಯಮಾಪನಕ್ಕೆ ತೆರೆದುಕೊಂಡ ಬಳಿಕ ಅವರ ಆತಂಕ ನಿವಾರಣೆಯಾಗಿದ್ದಲ್ಲದೆ, ಆಸಕ್ತಿಕರವಾಗಿಯೂ ಅನಿಸಿದೆ. ಈ ಕುರಿತು 2011–2012ರಲ್ಲಿ ಫೌಂಡೇಷನ್ ಒಂದು ಅಧ್ಯಯನವನ್ನು ಹಮ್ಮಿಕೊಂಡಿತ್ತು. ಬದಲಾದ ಪಠ್ಯಕ್ರಮದ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಶಿಕ್ಷಣ ಕ್ಷೇತ್ರದ ಭಾಗೀದಾರರ ಅನುಭವಗಳನ್ನು ವಿಶ್ಲೇಷಿಸುವುದು ಇದರ ಉದ್ದೇಶವಾಗಿತ್ತು. ಪರಿಷ್ಕೃತ ಪಠ್ಯಕ್ರಮವು ಎನ್ ಸಿಎಫ್ 2005 ಮತ್ತು ಎನ್ ಸಿಎಫ್ ಟಿಇ 2009ನ್ನು ಜೋಡಿಸಲು ಸಫಲವಾಗಿದೆ ಎಂದು ವರದಿಯು ಕಂಡುಕೊಂಡಿದೆ. ಭಾಗೀದಾರರು ವ್ಯಕ್ತಪಡಿಸಿರುವ ಪ್ರಮುಖ ಅಂಶಗಳು ಹೀಗಿವೆ:

- ಮಕ್ಕಳ ಮನಃಶಾಸ್ತ್ರವನ್ನು ಅರ್ಥೈಸಿಕೊಳ್ಳಲು ತಮಗೆ ಸಾಧ್ಯವಾಗಿದೆ ಎಂಬ ಅಂಶವನ್ನು ವಿದ್ಯಾರ್ಥಿ – ಪ್ರಶಿಕ್ಷಣಾರ್ಥಿಗಳು, ವಿಶೇಷವಾಗಿ ಶಿಕ್ಷಾ ಮಿತ್ರರು (ಅರೆ ಶಿಕ್ಷಕರು), ಪ್ರಮುಖವಾಗಿ ಉಲ್ಲೇಖಿಸಿದ್ದಾರೆ. ಆದರೆ ವಿಶೇಷ ಅವಶ್ಯಕತೆಯ ಮಕ್ಕಳಿಗೆ (ಸಿಡಬ್ಲ್ಯೂಎಸ್‌ಎನ್), ಬಹು ವರ್ಗದ, ಬಹು ಹಂತದ (ಎಂಜಿಎಂಎಲ್) ಮತ್ತು ನೀತಿ ಶಿಕ್ಷಣ ಹಾಗೂ ಸಂಸ್ಕೃತ ವಿಷಯದ ಬೋಧನೆ– ಕಲಿಕೆ ಪ್ರಕ್ರಿಯೆ ಕುರಿತು ಯಾವುದೇ ಚರ್ಚೆ ನಡೆದಿಲ್ಲ ಎಂಬ ಅಂಶವನ್ನು ಅವರು ಎತ್ತಿತೋರಿಸಿದ್ದಾರೆ. ಗಣಿತದ ಪಠ್ಯಕ್ರಮವು, ಪ್ರಾಥಮಿಕ ತರಗತಿಗಳಿಗೆ ಅವಶ್ಯಕತೆಗಿಂತ ಹೆಚ್ಚಿನ ಮಟ್ಟದ ಪಠ್ಯವನ್ನು ನೀಡಲಾಗಿದೆ ಎಂದು ಅವರು ವಿವರಿಸಿದ್ದಾರೆ.
- ಡಯಟ್ ಗಳು ಮತ್ತು ಡಿಆರ್ ಸಿಗಳ ಉಸ್ತುವಾರಿಗಳಾದ ಎಲ್ಲಾ ಪ್ರಾಂಶುಪಾಲರು ಪರಿಷ್ಕೃತ ಪಠ್ಯಕ್ರಮದ ಬಗ್ಗೆ ಸಂತೃಪ್ತಿ ವ್ಯಕ್ತಪಡಿಸಿದರು. ಪಠ್ಯಕ್ರಮವು ಸೈದ್ಧಾಂತಿಕವಾಗಿರುವುದಕ್ಕಿಂತ ಹೆಚ್ಚಾಗಿ ಪ್ರಾಯೋಗಿಕವಾಗಿರುವ ಕಾರಣ ತುಂಬಾ ಪರಿಣಾಮಕಾರಿಯಾಗಿದೆ ಎಂದು, ಹಿಂದಿನ (ಆರು ತಿಂಗಳ ಬಿಟಿಸಿ) ಪಠ್ಯಕ್ರಮವನ್ನು ವಿರೋಧಿಸಿದ್ದ ಕೆಲವು ಪ್ರಾಂಶುಪಾಲರು ಅಭಿಪ್ರಾಯಪಟ್ಟರು. ಪರಿಷ್ಕೃತ ಪಠ್ಯಕ್ರಮವು ಉತ್ತಮ ಶಿಕ್ಷಕರ ಗುಣಲಕ್ಷಣಗಳ ಬಗ್ಗೆ, ಶಾಲೆಯಲ್ಲಿ ಶಿಕ್ಷಕರು ಹೇಗೆ ಪಾಠ ಮಾಡಬೇಕು, ಬೋಧನೆಯನ್ನು ಹೇಗೆ ಆಸಕ್ತಿದಾಯಕವಾಗಿಸಬೇಕು ಮತ್ತು ಮಕ್ಕಳೊಂದಿಗೆ ಹೇಗೆ ಸಂವಹನ ನಡೆಸಬೇಕು ಎಂಬ ಬಗ್ಗೆ ಕೇಂದ್ರೀಕೃತವಾಗಿರುವುದು ಅವರಿಗೆ ಇಷ್ಟವಾಗಿತ್ತು. ಡಯಟ್ ಬೋಧಕ ಸಿಬ್ಬಂದಿ ಕೂಡಾ ಸೆಮಿಸ್ಟರ್ ಪದ್ಧತಿಯ ಪಠ್ಯಕ್ರಮವನ್ನು ಮೆಚ್ಚಿಕೊಂಡಿದ್ದರು.
- ಪಠ್ಯಕ್ರಮವು ವಿವರಣೆಗಿಂತ ಸಂವಾದಿಯಾಗಿರಬೇಕು ಎಂಬ ಗುರಿಯೊಂದಿಗೆ ಪಠ್ಯಕ್ರಮ ಅಭಿವೃದ್ಧಿ ತಂಡವು ಕೆಲಸ ಮಾಡಿತ್ತು. 'ವಿಷಯದ ಸ್ವರೂಪ' (ನೇಚರ್ ಆಫ್ ಸಬ್ಜೆಕ್ಟ್) ಎಂಬ ಪರಿಕಲ್ಪನೆಯನ್ನು ಪರಿಚಯಿಸಿರುವುದು (ಪ್ರಾಥಮಿಕವಾಗಿ ವಿವರಣಾತ್ಮಕ ವಸ್ತುವಿಗಿಂತ ಭಿನ್ನವಾದುದು) ಹೆಚ್ಚು ಅನುಕೂಲಕರವಾಗಿತ್ತು. ಅದು, ವಿದ್ಯಾರ್ಥಿಗಳಿಗೆ ತಮ್ಮ ವಿಷಯವನ್ನು ಇನ್ನಷ್ಟು ಚೆನ್ನಾಗಿ ಅರ್ಥ ಮಾಡಿಕೊಳ್ಳಲು ನೆರವಾಯಿತು.
- ಕೋರ್ಸ್ ತಾತ್ವಿಕ ನೆಲೆಯಲ್ಲಿ ಉತ್ತಮವಾಗಿದ್ದರೂ, ಪ್ರಾಯೋಗಿಕವಾಗಿರಲಿಲ್ಲ. ಮುಖ್ಯವಾಗಿ, ವಾಸ್ತವವನ್ನು ಅದು ಪರಿಗಣನೆಗೆ ತೆಗೆದುಕೊಂಡಿರಲಿಲ್ಲ. ಎಂದು ಪಠ್ಯಕ್ರಮ ಅಭಿವೃದ್ಧಿ ತಂಡವು ಮನಗಂಡಿತ್ತು. ಇನ್ನೊಂದು ಸಮಸ್ಯೆ ಏನೆಂದರೆ, ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚು ಇದ್ದ ಕಾರಣ ಕರ್ಸ್ ಮತ್ತು ಚಟುವಟಿಕೆಗಳನ್ನು ಒಟ್ಟಾರೆಯಾಗಿ ಕೈಗೆತ್ತಿಕೊಳ್ಳಲು ಆಗುತ್ತಿರಲಿಲ್ಲ ಎಂದೂ ಅದು ಅಭಿಪ್ರಾಯಪಟ್ಟರು.
- ವಿದ್ಯಾರ್ಥಿ ಪ್ರಶಿಕ್ಷಣಾರ್ಥಿಗಳಿಗೆ ತಮ್ಮ ಆಲೋಚನೆಗಳನ್ನು ವ್ಯಕ್ತಪಡಿಸಲು, ಗುಂಪು ಚರ್ಚೆಗಳಲ್ಲಿ ಮತ್ತು ಪ್ರಸ್ತುತಿಗಳಲ್ಲಿ ಪಾಲ್ಗೊಳ್ಳಲು ಹಾಗೂ ಇತರರ ಮಾತುಗಳನ್ನು ಆಲಿಸಲು ಅವಕಾಶವಿರುವುದು ಈ ಪರಿಷ್ಕೃತ ಪಠ್ಯಕ್ರಮದ ಪ್ರಮುಖ

ಅಂಶ ಎಂಬುದು ಡಯಟ್ ಬೋಧನಾ ಸಿಬ್ಬಂದಿಯ ಅಭಿಪ್ರಾಯ.

ಆದಾಗ್ಯೂ, ಸಂಸ್ಥೆಗಳ ಮಟ್ಟದಲ್ಲಿ ವರದಿ ಉತ್ತೇಜನಕಾರಿಯಾಗಿಲ್ಲ. ಅಲ್ಲಿ ಮೂಲಸೌಕರ್ಯ ಮತ್ತು ಮಾನವ ಸಂಪನ್ಮೂಲಗಳ ರೂಪದ ಸವಾಲುಗಳು ಇನ್ನೂ ಇವೆ. ಎರಡನೆಯದಾಗಿ, ಶಿಕ್ಷಕರ ಶಿಕ್ಷಣ ಸಂಸ್ಥೆಗಳ ಮುಖ್ಯಸ್ಥರನ್ನು ಪದೇ ಪದೇ ಬದಲಾಯಿಸುವುದು ಈ ಎಲ್ಲಾ ಮಾರ್ಪಾಡುಗಳ ಮೇಲೆ ಅಡ್ಡಪರಿಣಾಮ ಬೀರುತ್ತದೆ. ಅಲ್ಲದೆ, ಈ ಸಂಸ್ಥೆಗಳ ಗ್ರಂಥಾಲಯಗಳು ಅಸಮರ್ಪಕವಾಗಿದ್ದು, ಬೇಡಿಕೆಯನ್ನು ಪೂರೈಸುತ್ತಿಲ್ಲ. ಆರಂಭಿಕ ಹಂತದಲ್ಲಿ ಬದಲಾದ ಪಠ್ಯಕ್ರಮಕ್ಕೆ ತೆರೆದುಕೊಳ್ಳಲು ಸೀಮಿತ ಅವಕಾಶವಿದ್ದುದರಿಂದಾಗಿ, ಡಯಟ್ನ ಬೋಧಕ ಸಿಬ್ಬಂದಿಗಳು ತೋರಿದ ನಿರಾಸಕ್ತಿ ಕೂಡಾ ಸವಾಲಾಗಿ ಪರಿಣಮಿಸಿತು. ಇಂಟರ್ನ್ ಶಿಪ್ ನಂತಹ ಪಠ್ಯಕ್ರಮದ ಕೆಲವು ಅಂಶಗಳನ್ನು ಸಂಪೂರ್ಣವಾಗಿ ಕಾರ್ಯರೂಪಕ್ಕೆ ತರಲು ಸಾಧ್ಯವಿರಲಿಲ್ಲ. ಪ್ರತಿ ಡಯಟ್ ಗೆ ಮಂಜೂರು ಮಾಡಲಾದ ವಿದ್ಯಾರ್ಥಿ ಪ್ರಶಿಕ್ಷಣಾರ್ಥಿಗಳ ಸಂಖ್ಯೆ ಗಣನೀಯವಾಗಿ ಅಧಿಕವಿದ್ದುದು ಕೂಡಾ ಸಂಪನ್ಮೂಲದ ಕೊರತೆ ಎದುರಾಗಲು ಪ್ರಮುಖ ಕಾರಣಗಳಲ್ಲೊಂದು.

ವರದಿಯ ಪ್ರಕಾರ, ಸಾರ್ವಜನಿಕ–ಖಾಸಗಿ ಸಹಭಾಗಿತ್ವವು ಕೋರ್ಸ್ ನ ಅಳವಡಿಕೆಯಲ್ಲಿ ಮಹತ್ತರ ಪಾತ್ರವನ್ನು ವಹಿಸಿತು. ಒಂದೇ ಸೂರಿನಡಿ ಬೆಂಬಲ, ಬೋಧಕ ಸಿಬ್ಬಂದಿಯ ಸವಾಲುಗಳು ಹಾಗೂ ಸಮಸ್ಯೆಗಳನ್ನು ಸೂಕ್ತವಾಗಿ ಪರಿಹರಿಸುವ ನಿಟ್ಟಿನಲ್ಲಿ ಇದು ತುಂಬಾ ಸಹಕಾರಿಯಾಯಿತು. ಡಯಟ್ ನ ಬೋಧಕ ಸಿಬ್ಬಂದಿಯಲ್ಲಿ ದೂರದೃಷ್ಟಿತ್ವವನ್ನು ತುಂಬಲು ವಿಶೇಷ ಅವಕಾಶವನ್ನು ಮಾಡಿಕೊಡುವುದು, ಪ್ರತಿ ಸಂಸ್ಥೆಗೂ ಸಾಮಗ್ರಿಗಳನ್ನು ಪೂರೈಸುವುದು ಮುಖ್ಯ ಅಂಶಗಳಾಗಿದ್ದವು. ಈ ಸಂಬಂಧ ಫೌಂಡೇಷನ್ ಸಕಾಲಿಕ ನೆರವು ನೀಡಲು ಶಕ್ತವಾಯಿತು.

ಒಟ್ಟಾರೆಯಾಗಿ, ಎಲ್ಲಾ ಇಲಾಖೆಗಳು ಮತ್ತು ಭಾಗೀದಾರರು ಜೊತೆಯಾಗಿ ಸಾಗುತ್ತಲೇ, ರಾಜ್ಯದಲ್ಲಿ ಪರಿಷ್ಕೃತ ಪಠ್ಯಕ್ರಮವನ್ನು ಅನುಷ್ಠಾನಗೊಳ್ಳುವಂತೆ ಮಾಡಲು ಸರ್ಕಾರ ಬಹಳ ಶ್ರಮವಹಿಸಿದೆ. ಅಧಿಕಾರಶಾಹಿಯ ಪ್ರಾಮಾಣಿಕ ತೊಡಗಿಸಿಕೊಳ್ಳುವಿಕೆ ಮತ್ತು ಬದ್ಧತೆಯು, ಎದುರಾಗುವ ಯಾವುದೇ ಸಮಸ್ಯೆಗಳನ್ನು ನಿಭಾಯಿಸಿ ಈ ವ್ಯವಸ್ಥೆಯಲ್ಲಿ ಸುಸ್ಥಿರ ಬದಲಾವಣೆಯನ್ನು ತರಬಹುದು ಎಂಬುದಕ್ಕೆ ಉತ್ತರಾಖಂಡದ ಈ ಕತೆಯೇ ಸಾಕ್ಷಿ.

● ಅನುವಾದಕರು: **ರೋಹಿಣಿ ಮುಂಡಾಜೆ** | ಪರಿಶೀಲಕರು: **ಲತಾ ಕೆ ಸಿ**

**ಉಲ್ಲೇಖಗಳು**


1. ದಿ ಕಾನ್ಸೆಪ್ಚುವಲೈಸೇಷನ್ ಅಂಡ್ ಇಂಪ್ಲಿಮೆಂಟೇಶನ್ ಆಫ್ ಪ್ರಿ–ಸರ್ವಿಸ್ ಟೀಚರ್ ಎಜ್ಯುಕೇಶನ್ ಕರಿಕ್ಯುಲಮ್ (ಬಿಟಿಸಿ), 2010–2012 ಉತ್ತರಾಖಂಡ



**ಅನಂತ್**, ಬೆಂಗಳೂರಿನ ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯದಲ್ಲಿ ಪ್ರಸ್ತುತ ಕೆಲಸ ಮಾಡುತ್ತಿದ್ದಾರೆ. ಅವರು ಬಿಹಾರ, ಛತ್ತೀಸ್ ಗಢ ಮಧ್ಯಪ್ರದೇಶ ಮತ್ತು ಉತ್ತರಾಖಂಡದಲ್ಲಿ ಅಜೀಂ ಪ್ರೇಮ್ ಜಿ ಫೌಂಡೇಷನ್ ನ ಕ್ಷೇತ್ರ ಕಾರ್ಯಕ್ರಮಗಳ ನೇತೃತ್ವ ವಹಿಸಿಕೊಂಡಿದ್ದರು. ಮಧ್ಯಪ್ರದೇಶ ಸರ್ಕಾರದೊಂದಿಗೆ ಟಿಎಲ್ ಸಿ, ಡಿಪಿಇಪಿ ಮತ್ತು ಎಸ್ಎಸ್ಎಗಳ ಅನುಷ್ಠಾನದಲ್ಲಿ 10 ವರ್ಷಗಳ ಕಾಲ ಕೆಲಸ ಮಾಡಿದ್ದಾರೆ. ಅವರನ್ನು anant@azimpremjifoundation.org ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.

**ಕೈಲಾಶ್** ಅವರು ಪ್ರಸ್ತುತ ಉತ್ತರಾಖಂಡದಲ್ಲಿ ಅಜೀಂ ಪ್ರೇಮ್ ಜಿ ಫೌಂಡೇಷನ್ ನಲ್ಲಿ ರಾಜ್ಯ ಮುಖ್ಯಸ್ಥರಾಗಿದ್ದಾರೆ. ಮಧ್ಯಪ್ರದೇಶ ಮತ್ತು ಬಿಹಾರ ರಾಜ್ಯಗಳಲ್ಲಿ ಕೆಲಸ ಮಾಡಿರುವ ಅವರು, ಫೌಂಡೇಷನ್ ಸೇರುವ ಮುನ್ನ ಉತ್ತರಾಖಂಡ ರಾಜ್ಯದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಅವರನ್ನು kandpal@azimpremjifoundation.org ಇಮೇಲ್ ಐಡಿಯ ಮೂಲಕ ಸಂಪರ್ಕಿಸಬಹುದು.